KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ ಜನವರಿ ೨೨, ೨೦೦೯ (ಮಾಘ ೨, ಶಕ ವರ್ಷ ೧೯೩೦) | ಸಂಚಿಕೆ ೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2008–09ನೇ ಸಾಲಿಗೆ ಮೊದಲನೇ ಕಂತಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಗ್ರಾಅಪ.4.ಡಬ್ಲೂಜಿಪಿ.08, ದಿನಾಂಕ 16–4–2008.
2. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ. ಪಿಸಿ(ಪಿ)19/125/ಕೆಆರ್‌ಟಿ/2008, ಡಬ್ಲ್ಯೂಜಿಎಸ್ ದಿನಾಂಕ 31–7–2008.
3. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ. ಪಿಸಿ(ಪಿ) 19/320/ಎಸ್‌ಸಿಎ/2008–ಡಬ್ಲ್ಯೂಜಿಎಸ್ ದಿನಾಂಕ 30–6–2008.
4. ಹಣಕಾಸು ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಆದೇಶ ಸಂ. ಎಫ್.ನಂ. 44(6) ಪಿಎಫ್I/2008–119, ದಿನಾಂಕ 15–7–2008.
5. ಆರ್ಥಿಕ ಇಲಾಖೆಯ ಜಮಾ ಧೃಢೀಕರಣ ಪತ್ರ ದಿನಾಂಕ 30–7–2008.

**ಪ್ರಸ್ತಾವನೆ :**

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನವನ್ನು ಮೇಲೆ ಓದಲಾದ ಪತ್ರ (1)ರಂತೆ 2008–09ನೇ ಸಾಲಿನಲ್ಲಿ ಮುಂದುವರೆಸಲಾಗಿದೆ. ಭಾರತ ಸರ್ಕಾರದ ಯೋಜನಾ ಆಯೋಗದ ಪಶ್ಚಿಮ ಘಟ್ಟಗಳ ಸಚಿವಾಲಯವು ಮೇಲೆ ಓದಲಾದ ಪತ್ರ (2) ರಲ್ಲಿ ಈ ಕಾರ್ಯಕ್ರಮದ ಅನುಷ್ಠಾನ ಕಾರ್ಯವನ್ನು 2008–09ನೇ ಸಾಲಿನಲ್ಲಿ ಮುಂದುವರೆಸುವ ಸಲುವಾಗಿ ರಾಜ್ಯಕ್ಕೆ ಹಂಚಿಕೆ ಮಾಡಿರುವ ವಿಶೇಷ ಕೇಂದ್ರ ಅನುದಾನ ರೂ. 2924.00 ಲಕ್ಷಗಳ ವಾರ್ಷಿಕ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿರುತ್ತದೆ. ಇದರಲ್ಲಿ ಶೇ.90 ಭಾಗ ಅಂದರೆ ರೂ. 2631.60 ಲಕ್ಷ ಕೇಂದ್ರ ಸರ್ಕಾರ ಬಿಡುಗಡೆ ಮಾಡಲಿರುವ ನಿಧಿ ರೂಪದ್ದಾಗಿದ್ದು, ಉಳಿಕೆ ಶೇ. 10 ಭಾಗ ಅಂದರೆ ರೂ. 292.40 ಲಕ್ಷ ರಾಜ್ಯ ಸರ್ಕಾರವು ತನ್ನ ಸಂಪನ್ಮೂಲದಿಂದ ಭರಿಸಬೇಕಾದ ಸಾಲ ಸ್ವರೂಪದ್ದಾಗಿರುತ್ತದೆ. ಆ ಸಚಿವಾಲಯವು ಮೇಲೆ ಓದಲಾದ ಪತ್ರ (3)ರಲ್ಲಿ ಪ್ರಸಕ್ತ ಸಾಲಿನ ಒಟ್ಟಾರೆ ಅನುದಾನ ರೂ. 2924.00 ಲಕ್ಷ ಪೈಕಿ ಶೇ. 75ರಷ್ಟು ಅಂದರೆ ರೂ. 2193.00 ಲಕ್ಷ ಆಗಲಿದ್ದು, ಅದರಲ್ಲಿ ವಿಶೇಷ ಕೇಂದ್ರ ಅನುದಾನದ ನಿಧಿ ಭಾಗದ ಮೊತ್ತವಾದ ರೂ. 1973.70 ಲಕ್ಷಗಳನ್ನು ಮೊದಲನೇ ಕಂತಿನ ಅನುದಾನವಾಗಿ ರಾಜ್ಯಕ್ಕೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದ್ದು, ಭಾರತ ಸರ್ಕಾರದ ಹಣಕಾಸು ಮಂತ್ರಾಲಯವು ಮೇಲೆ ಓದಲಾದ ಪತ್ರ (4)

ರಂತೆ ಸದರಿ ಅನುದಾನವನ್ನು ರಾಜ್ಯಕ್ಕೆ ಬಿಡುಗಡೆ ಮಾಡಿರುತ್ತದೆ. ಪ್ರಸಕ್ತ ಸಾಲಿನ ರಾಜ್ಯ ಆಯವ್ಯಯದಲ್ಲಿ ಈ ಕಾರ್ಯಕ್ರಮಕ್ಕೆ ರೂ. 2332.64 ಲಕ್ಷ ಅನುದಾನ ಒದಗಿಸಿದ್ದು ಈ ಪೈಕಿ 2007–08ನೇ ಸಾಲಿನ ಮೂರನೇ ಕಂತಿನ ಬಾಬ್ತು ರೂ. 539.10 ಲಕ್ಷ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಈಗಾಗಲೇ ಬಿಡುಗಡೆ ಮಾಡಿರುವುದರಿಂದ, ಮೇಲ್ಕಂಡ ಮೊದಲನೇ ಕಂತಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ರೂ. 163.96 ಲಕ್ಷ ಅನುದಾನದ ಕೊರತೆ ಉಂಟಾಗಿರುತ್ತದೆ. ಈ ಕಾರ್ಯಕ್ರಮದ ಕಾಮಗಾರಿಗಳನ್ನು ತುರ್ತಾಗಿ ಕೈಗೊಳ್ಳಬೇಕಾಗಿರುವ ಹಿನ್ನಲೆಯಲ್ಲಿ ಹಾಲಿ ಲಭ್ಯವಿರುವ ಆಯವ್ಯಯ ಹಂಚಿಕೆಯಲ್ಲಿ ರಾಜ್ಯದ ಸಂಬಂಧ ಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಪ್ರಸಕ್ತ ಸಾಲಿನ ಮೊದಲನೇ ಕಂತಿನ ಭಾಗಶಃ ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂ: ಗ್ರಾಅಪ 6 ಡಬ್ಲ್ಯೂಜಿಪಿ 2008, ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2008.**

ಕೇಂದ್ರ ಪುರಸ್ಕೃತ ಕಾರ್ಯಕ್ರಮವಾದ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು 2008–09ನೇ ಸಾಲಿನಲ್ಲಿ ಅನುಮೋದಿತ ಕ್ರಿಯಾ ಯೋಜನೆಯ ಅನ್ವಯ ಅನುಷ್ಠಾನಗೊಳಿಸುವ ಸಲುವಾಗಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಮೊದಲನೇ ಕಂತಿನ ವಿಶೇಷ ಕೇಂದ್ರ ಅನುದಾನ ರೂ. 1973.70 ಲಕ್ಷ ಪೈಕಿ ರಾಜ್ಯ ಆಯವ್ಯಯ ಹಂಚಿಕೆಯಲ್ಲಿ ಕೊರತೆ ಉಂಟಾಗಿರುವ ರೂ. 163.96 ಲಕ್ಷ ಅನುದಾನ ಹೊರತುಪಡಿಸಿ ಉಳಿಕೆ ಅನುದಾನ ರೂ. 1809.74 ಲಕ್ಷಗಳಲ್ಲಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಯೋಜನಾ ಕೋಶಕ್ಕೆ ರೂ. 16.20 ಲಕ್ಷ ಅನುದಾನ ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದ ಅನುದಾನ ರೂ. 1793.54 ಲಕ್ಷ (ರೂ. ಹದಿನೇಳು ಕೋಟಿ ತೊಂಭತ್ತಮೂರು ಲಕ್ಷ ಐವತ್ತನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ರಾಜ್ಯದ 11 ಜಿಲ್ಲಾ ಪಂಚಾಯತಿಗಳಿಗೆ ಅನುಬಂಧ–1ರಲ್ಲಿ ತೋರಿಸಿರುವಂತೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1. 2008–09ನೇ ಸಾಲಿನಲ್ಲಿ ನಿಮ್ಮ ಜಿಲ್ಲೆಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ನಮೂದಿಸಿರುವ ಕಾರ್ಯ ಕ್ರಮಗಳನ್ನು ಮಾತ್ರ ನಿಮ್ಮ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನಕ್ಕೊಳಪಟ್ಟು ಅನುಷ್ಠಾನಗೊಳಿಸುವುದು.
2. ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರವು ಕಾಲಕಾಲಕ್ಕೆ ಹೊರಡಿಸುತ್ತಿರುವ ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸುವುದು.
3. ಒಂದು ವಲಯಕ್ಕೆ ನಿಗದಿಪಡಿಸಿರುವ ಅನುದಾನವನ್ನು ಇನ್ನೊಂದು ವಲಯಕ್ಕೆ ಯಾವುದೇ ಕಾರಣಕ್ಕೂ ವರ್ಗಾಯಿಸಬಾರದು.
4. ಹಾಲಿ ಬಿಡುಗಡೆ ಮಾಡಿರುವ ಅನುದಾನದಲ್ಲಿ ಅನುಮೋದಿತ ಕ್ರಿಯಾ ಯೋಜನೆಯಲ್ಲಿನ ಮುಂದುವರೆದ ಅಪೂರ್ಣ ಕಾಮಗಾರಿಗಳಿಗೆ ಪ್ರಥಮ ಆದ್ಯತೆ ನೀಡಿ ಪೂರ್ಣಗೊಳಿಸತಕ್ಕದ್ದು. ಆನಂತರ ತೋಟಗಾರಿಕೆ ಹಾಗೂ ಅರಣ್ಯೀಕರಣ ಕಾಮಗಾರಿಗಳಿಗೆ ಆದ್ಯತೆ ನೀಡಿ ಅನುಮೋದನೆಯಾಗಿರುವ ಹೊಸ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಅನುಷ್ಠಾನಗೊಳಿಸುವುದು.
5. ಸಾಂಬಾರು ಮಂಡಳಿಯ ಕಾರ್ಯಕ್ರಮಗಳಿಗೆ ಪ್ರಸ್ತುತ ಕಂತಿನಲ್ಲಿ ಒದಗಿಸಿರುವ ಅನುದಾನ ರೂ. 1.33 ಲಕ್ಷಗಳನ್ನು ಆ ಮಂಡಳಿಗೆ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಯು ಬಿಡುಗಡೆ ಮಾಡುವುದು.
6. 2007–08ನೇ ಸಾಲಿನಲ್ಲಿ ಬಿಡುಗಡೆ ಮಾಡಿದ ಅನುದಾನದಲ್ಲಿ ಖರ್ಚಾಗದೇ ಉಳಿದ ಅನುದಾನವನ್ನು 2008–09ನೇ ಸಾಲಿಗೆ ನಿಮ್ಮ ಜಿಲ್ಲೆಯ ಅನುಮೋದಿತ ಅನುದಾನದಲ್ಲಿ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಸಮಯದಲ್ಲಿ ಹೊಂದಾಣಿಕೆ ಮಾಡಲಾಗುವುದು ಹಾಗೂ ಪ್ರಸಕ್ತ ಸಾಲಿನ ಮೊದಲನೇ ಕಂತಿನ ಅನುದಾನದಲ್ಲಿ ಶೇಕಡ 60ಕ್ಕಿಂತ ಹೆಚ್ಚಾಗಿ ಖರ್ಚು ಮಾಡಿದಲ್ಲಿ ಮಾತ್ರ ಎರಡನೇ ಕಂತಿನ ಅನುದಾನ ಈ ಸಾಲಿನಲ್ಲಿ ಕೇಂದ್ರದಿಂದ ಬಿಡುಗಡೆಯಾಗಲಿದೆ ಎಂಬ ಅಂಶವನ್ನು ಮುಖ್ಯವಾಗಿ ಗಮನಿಸುವುದು.
7. 2007–08ನೇ ಸಾಲಿನ ಹಣ ಬಳಕೆ ಪ್ರಮಾಣ ಪತ್ರವನ್ನು (ವಲಯವಾರು ಅನುಮೋದಿತ ಅನುದಾನ, ಖರ್ಚು ಹಾಗೂ ಉಳಿಕೆ ತಃಖ್ತೆಯೊಂದಿಗೆ) ಆಡಿಟ್ ವರದಿಯೊಂದಿಗೆ ಸೆಪ್ಟೆಂಬರ್ 2008ರೊಳಗೆ ತಪ್ಪದೇ ಕಳುಹಿಸುವುದು.

8. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲೇ ಪ್ರತಿ ತ್ರೈಮಾಸಿಕ ವರದಿಯನ್ನು ಸಕಾಲದಲ್ಲಿ ತಪ್ಪದೇ ಸರ್ಕಾರಕ್ಕೆ ಸಲ್ಲಿಸುವುದು.
9. ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಸಹಾಯಾನುದಾನದ ಬಿಲ್ಲಿನ ಮೇಲೆ ನಿಯಮಗಳ ಪ್ರಕಾರ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಖಜಾನೆಯಿಂದ ಪಡೆಯುವುದು.
   2551–ಗುಡ್ಡಗಾಡು ಪ್ರದೇಶಗಳು–01–ಪಶ್ಚಿಮ ಘಟ್ಟಗಳು–198–ಗ್ರಾಮ ಪಂಚಾಯತಿಗಳಿಗೆ ಸಹಾಯ–6–ಗ್ರಾಮ ಪಂಚಾಯತ್–ಕೇಂದ್ರ ಪುರಸ್ಕೃತ ಯೋಜನೆ–02–ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ (ಯೋಜನೆ)

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ: ಗ್ರಾಅಪ 351 ಪಿಬಿಎಸ್ 2008ರ ದಿನಾಂಕ 6–8–2008ರಲ್ಲಿ ಸಹಮತಿಸಿದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಂ. ಶಿರೋಳ್**
ನಿರ್ದೇಶಕರು,
ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ ಘಟಕ
ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಅನುಬಂಧ–1**

**ಸರ್ಕಾರದ ಆದೇಶದ ಸಂ. ಗ್ರಾಅಪ 6 ಡಬ್ಲ್ಯೂಜಿಪಿ 2008, ಬೆಂಗಳೂರು ದಿನಾಂಕ 11ನೇ ಆಗಸ್ಟ್ 2008**
**ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2008–09ನೇ ಸಾಲಿನ ಜಿಲ್ಲಾವಾರು ಮೊದಲನೇ ಕಂತಿನ ಅನುದಾನ ಬಿಡುಗಡೆ ತಃಖ್ತೆ**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆಯ ಹೆಸರು | ಜಿಲ್ಲೆಯ ಕೋಡ್ | 2008–09ನೇ ಸಾಲಿನ ಜಿಲ್ಲಾವಾರು ಅನುದಾನ ಹಂಚಿಕೆ | ಜಿಲ್ಲೆಗಳಿಗೆ ಬಿಡುಗಡೆ ಮಾಡಬೇಕಾಗಿದ್ದ ಮೊದಲನೇ ಕಂತಿನ ಅನುದಾನ (ವಿಶೇಷ ಕೇಂದ್ರ ಅನುದಾನ) | ಹಾಲಿ ಜಿಲ್ಲೆಗಳಿಗೆ ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ | ಕಾಲಂ 6ರ ಪೈಕಿ ಸಾಂಬಾರು ಮಂಡಳಿಗೆ ಬಿಡುಗಡೆ ಆಗಿರುವ ಅನುದಾನ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬೆಳಗಾಂ* | 413 | 473.75 | 319.781 | 155.821 | – |
| 2 | ಚಾಮರಾಜನಗರ | 456 | 86.20 | 58.185 | 58.185 | – |
| 3 | ಚಿಕ್ಕಮಗಳೂರು | 408 | 276.35 | 186.536 | 186.536 | – |
| 4 | ದಕ್ಷಿಣ ಕನ್ನಡ | 409 | 206.30 | 139.253 | 139.253 | – |
| 5 | ಧಾರವಾಡ | 415 | 67.20 | 45.360 | 45.360 | – |
| 6 | ಹಾಸನ | 410 | 221.65 | 149.614 | 149.614 | 1.33 |
| 7 | ಕೊಡಗು | 411 | 247.90 | 167.332 | 167.332 | – |
| 8 | ಮೈಸೂರು | 407 | 96.95 | 65.441 | 65.441 | – |
| 9 | ಶಿವಮೊಗ್ಗ | 405 | 410.45 | 277.054 | 277.054 | – |

| 1 | 2 | 3 | 4 | 5 | 6 | 7 |
|---|---|---|---|---|---|---|
| 10 | ಉಡುಪಿ | 457 | 296.85 | 200.374 | 200.374 | – |
| 11 | ಉತ್ತರ ಕನ್ನಡ | 416 | 516.40 | 348.570 | 348.570 | – |
| | **ಒಟ್ಟು:** | | **2900.00** | **1957.500** | **1793.540** | **1.33** |
| 12 | ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ ಯೋಜನಾ ಕೋಶ | | 24.00 | 16.200 | 16.200 | – |
| | **ಜುಮ್ಲಾ** | | **2924.00** | **1973.700** | **1809.740** | **1.33** |

* ಪ್ರಸಕ್ತ ಸಾಲಿನ ರಾಜ್ಯ ಆಯವ್ಯಯದಲ್ಲಿ ಅನುದಾನ ಹಂಚಿಕೆಯ ಕೊರತೆ ಉಂಟಾಗಿರುವುದರಿಂದ ಬೆಳಗಾಂ ಜಿಲ್ಲೆಗೆ ಬಿಡುಗಡೆ ಮಾಡಬೇಕಾಗಿರುವ ಮೊದಲನೇ ಕಂತಿನ ಬಾಕಿ ಅನುದಾನ ರೂ. 163.96 ಲಕ್ಷಗಳನ್ನು ಆರ್ಥಿಕ ಇಲಾಖೆಯಿಂದ ಪೂರಕ ಅಂದಾಜಿನಲ್ಲಿ ಹೆಚ್ಚುವರಿ ಅನುದಾನ ಹಂಚಿಕೆಯಾದ ಕೂಡಲೇ ಬಿಡುಗಡೆ ಮಾಡಲಾಗುವುದು.

**ಸಿ.ಎಂ. ಶಿರೋಳ್**
ನಿರ್ದೇಶಕರು,
ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ ಘಟಕ
ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್.1238

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕಾರವಾರ ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಜರುಗಿಸುವ ಕುರಿತು – ಪ್ರಕರಣವನ್ನು ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಉಪ ನಿಬಂಧಕರು, ವಿಚಾರಣೆ–4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: Compt:UPLOK/MYS/254/2007-DRE-4, ದಿನಾಂಕ 30–7–2008.

**ಪ್ರಸ್ತಾವನೆ :**

ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕಾರವಾರ ಇವರು ಈ ಹಿಂದೆ ಉಪ ನಿರ್ದೇಶಕರು, ಚಾಮರಾಜನಗರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಶ್ರೀ ನಜೀಬ್ ಸಾಬ್ ಇವರಿಗೆ ಗ್ರಾನೈಟ್ ಕಲ್ಲನ್ನು ಸಾಗಿಸಲು ಪರ್‌ಮಿಟ್‌ಗಳನ್ನು ನೀಡಲು ಇವರಿಂದ ರೂ. 20,000–00ಗಳ ಅಕ್ರಮ ಸಂಭಾವನೆ/ಲಂಚವನ್ನು ನೀಡುವಂತೆ ಒತ್ತಾಯಿಸಿದ್ದು, ಇದಕ್ಕೆ ಸಹಮತಿಸದೇ ಶ್ರೀ ನಜೀಬ್‌ಸಾಬ್ ಇವರು ಪೊಲೀಸ್ ಇನ್ಸ್‌ಫೆಕ್ಟರ್, ಕರ್ನಾಟಕ ಲೋಕಾಯುಕ್ತ, ಮೈಸೂರು ಇಲ್ಲಿ ದೂರನ್ನು ದಾಖಲಿಸಿದ್ದು, ಅಂತೆಯೇ ಲೋಕಾಯುಕ್ತ ಪೊಲೀಸರು ನಡೆಸಿದ ದಾಳಿಯಲ್ಲಿ ಶ್ರೀ ಕೆ. ತಿಮ್ಮಪ್ಪ, ಇವರು ಶ್ರೀ ನಜೀಬ್ ಸಾಬ್ ಇವರಿಂದ ರೂ. 20,000–00ಗಳ ಲಂಚವನ್ನು ಪಡೆಯುವಾಗ ಸಿಕ್ಕಿಬಿದ್ದಿರುತ್ತಾರೆಂದು ಹಾಗೂ ಇವರ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿದ್ದ ಕಾರಣ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸುವ ಸಲುವಾಗಿ ಇವರ ವಿರುದ್ಧ ಮೈಸೂರು ಸಿವಿಲ್ ನ್ಯಾಯಾಲಯ ಇಲ್ಲಿ ಲೋಕಾಯುಕ್ತ ಪೊಲೀಸರು ಮೊಕದ್ದಮೆ ಸಂಖ್ಯೆ: 20/2007 ರನ್ನು ದಾಖಲಿಸಲಾಗಿರುತ್ತದೆ ಎಂದು ವರದಿ ಮಾಡುತ್ತಾ, ಅಧಿಕಾರಿಯ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ಇವರ ವರ್ತನೆಯು ಸರ್ಕಾರಿ ನೌಕರನಿಗೆ ಸಲ್ಲದ ರೀತಿಯ ವರ್ತನೆಯಾಗಿರುವುದರಿಂದ ಶ್ರೀ ಕೆ. ತಿಮ್ಮಪ್ಪ, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ಪ್ರಕಾರ ಕಠಿಣ ದಂಡನೆಯನ್ನು ವಿಧಿಸಲು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸುವಂತೆ ಹಾಗೂ ಈ ರೀತಿ ನಡೆಸಲಾಗುವ ವಿಚಾರಣೆಯನ್ನು ಇದೇ ನಿಯಮಾವಳಿಗಳ ನಿಯಮ–

14(ಎ)ರ ಪ್ರಕಾರ ಮಾನ್ಯ ಲೋಕಾಯುಕ್ತರವರ ಕಛೇರಿಗೆ ವಹಿಸಿಕೊಡುವಂತೆ ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಸೆಕ್ಷನ್ 12(3)ರ ಪ್ರಕಾರ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸುತ್ತಾ, ಅಂತೆಯೇ ಕ್ರಮವನ್ನು ತೆಗೆದುಕೊಳ್ಳುವಂತೆ ಉಪ ನಿಬಂಧಕರು, ವಿಚಾರಣೆ–4, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 92 ಎಂಜಿಎಸ್ 2005 ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕಾರವಾರ ಇವರ ವಿರುದ್ಧದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11ರ ಪ್ರಕಾರ ವಿಚಾರಣೆಯನ್ನು ನಡೆಸಲು ಸರ್ಕಾರದ ಅನುಮತಿಯನ್ನು ನೀಡಿದೆ.

ಈ ಪ್ರಕರಣವನ್ನು/ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 14(A)ರ ಪ್ರಕಾರ ಕರ್ನಾಟಕ ಲೋಕಾಯುಕ್ತರ ಕಛೇರಿಗೆ ಸರ್ಕಾರವು ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1279

**ಎ.ಪಿ. ರಾಮಕೃಷ್ಣ**
ಪೀಠಾಧಿಕಾರಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಕೇಂದ್ರ ಪುರಸ್ಕೃತ ಯೋಜನೆ ನರ್ಮ್ ಯೋಜನೆಯಡಿ ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆ (IHSDP) ಅನುಷ್ಠಾನ – ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನದ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ವಇ/60/ಕೊಮಂಲೆ/2005(ಭಾಗ), ದಿನಾಂಕ 6–8–2007 ಮತ್ತು 27–3–2008.
2. ಸರ್ಕಾರದ ತಿದ್ದುಪಡಿ ಆದೇಶದ ಸಂಖ್ಯೆ: ವಇ/60/ಕೊಮಂಲೆ/2005(ಭಾಗ) ದಿನಾಂಕ 31–3–2008.
3. ಕೇಂದ್ರ ಸರ್ಕಾರದ ಮಂಜೂರಾತಿ/ಬಿಡುಗಡೆ ಪತ್ರ ಸಂಖ್ಯೆ F.No. 59/(7)/PF-1/2007-238, ದಿನಾಂಕ 22–1–2008.
4. ಕೇಂದ್ರ ಸರ್ಕಾರದ ಮಂಜೂರಾತಿ/ಬಿಡುಗಡೆ ಪತ್ರ ಸಂಖ್ಯೆ: F.No. 59/(7)/PF-1/2007-286 ದಿನಾಂಕ 5–3–2008.
5. ರಾಜ್ಯ ಸರ್ಕಾರದ ಆರ್ಥಿಕ ಇಲಾಖೆಯ ಜಮಾ ದೃಢೀಕರಣ ಪತ್ರ ಸಂಖ್ಯೆ: ಆಇ/78/ಎಫ್‌ಆರ್‌ಸಿ/2008, ದಿನಾಂಕ 24–1–2008.
6. ರಾಜ್ಯ ಸರ್ಕಾರದ ಆರ್ಥಿಕ ಇಲಾಖೆಯ ಜಮಾ ದೃಢೀಕರಣ ಪತ್ರ ಸಂಖ್ಯೆ: ಆಇ/249/ಎಫ್‌ಆರ್‌ಸಿ/2008, ದಿನಾಂಕ 10–3–2008.
7. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರ ಸಂಖ್ಯೆ: ಕಕೊನಿಮ:ಲೆ.ಪ.ಶಾ: ಕೇಂದ್ರ/ರಾಜ್ಯ ಸರ್ಕಾರದ ಅನುದಾನ: ಐಹೆಚ್‌ಎಸ್‌ಡಿಪಿ:07–08, ದಿನಾಂಕ 26–5–2008.

**ಪ್ರಸ್ತಾವನೆ :**

ಕೇಂದ್ರ ಪುರಸ್ಕೃತ ನರ್ಮ್ ಯೋಜನೆಯ ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆ (IHSDP) ಯಡಿಯಲ್ಲಿ ಕೇಂದ್ರದಿಂದ ಮಂಜೂರಾಗಿರುವ 25 ನಗರ/ಪಟ್ಟಣಗಳ ಐಹೆಚ್‌ಎಸ್‌ಡಿಪಿ ಯೋಜನೆಯ ಅನುಷ್ಠಾನಕ್ಕಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ದಿನಾಂಕ 6–8–2007ರ ಸರ್ಕಾರದ ಆದೇಶಗಳಲ್ಲಿ ಬಳ್ಳಾರಿ, ರಾಮನಗರ, ಮುಳಬಾಗಿಲು, ಸವದತ್ತಿ ಮತ್ತು ಸಿಂಧನೂರು ಪಟ್ಟಣಗಳಲ್ಲಿನ ಯೋಜನೆಗಳಿಗೆ ಕೇಂದ್ರ ಸರ್ಕಾರದಿಂದ ಬಿಡುಗಡೆಯಾಗಿದ್ದ, ಮೊದಲನೇ ಕಂತಿನ ಅನುದಾನ ರೂ. 2094–94 ಲಕ್ಷಗಳು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆಯಾಗಿರುತ್ತದೆ ಹಾಗೂ

ದಿನಾಂಕ 27–3–2008ರ ಸರ್ಕಾರದ ಆದೇಶದಲ್ಲಿ ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನ ಒಟ್ಟು ರೂ. 1194.68 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿತ್ತು. ಆದರೆ ದಿನಾಂಕ 31–3–2008ರ ತಿದ್ದುಪಡಿ ಆದೇಶದಲ್ಲಿ ಕ್ರಮ ಸಂಖ್ಯೆ (2) 2007–08ನೇ ಸಾಲಿನ ಪೂರಕ ಅಂದಾಜು–II ರಲ್ಲಿ ರೂ. 14.94 ಲಕ್ಷಗಳನ್ನು ಬಿಡುಗಡೆಗೊಳಿಸಿದ್ದರೂ, 2007–08ನೇ ಸಾಲಿನ ಆಯವ್ಯಯದಲ್ಲಿ ಈ ಮೊತ್ತವು ಸಕ್ರಮಗೊಳ್ಳದಿದ್ದ ಕಾರಣ, 2008–09ನೇ ಸಾಲಿನ ಪೂರಕ ಆಯವ್ಯಯದಲ್ಲಿ ಸಕ್ರಮಗೊಳಿಸಿಕೊಳ್ಳಬೇಕೆಂಬ ಆರ್ಥಿಕ ಇಲಾಖೆಯ ಸೂಚನೆ ಮೇರೆಗೆ ರೂ. 14.94 ಲಕ್ಷವನ್ನು ಕಡಿತಗೊಳಿಸಿ ರೂ. 1179.74 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿತ್ತು.

ಕ್ರಮವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (3) – (6) ರಲ್ಲಿ ರಾಜ್ಯದ 15 ನಗರ/ಪಟ್ಟಣಗಳಿಗೆ ಬಿಡುಗಡೆ ಮಾಡಬೇಕಾಗಿದ್ದ ಅನುದಾನದ ಜೊತೆಗೆ 5 ನಗರ/ಪಟ್ಟಣಗಳ ಒಟ್ಟು 20 ಯೋಜನೆಗಳಿಗೆ ಕ್ರಮವಾಗಿ ರೂ. 2301.84 ಲಕ್ಷ ಹಾಗೂ ರೂ. 1996.13 ಲಕ್ಷಗಳನ್ನು ಕೇಂದ್ರವು ಬಿಡುಗಡೆಗೊಳಿಸಿರುತ್ತದೆ. ಅದರಂತೆ, ರಾಜ್ಯ ಆರ್ಥಿಕ ಇಲಾಖೆಯಿಂದ ಜಮಾ ದೃಢೀಕರಣ ಪತ್ರ ಸಹ ಬಂದಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರಲ್ಲಿ ಆಯುಕ್ತರು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿರವರು ಕೇಂದ್ರದಿಂದ ಬಿಡುಗಡೆಯಾಗಿರುವ ಅನುದಾನ ಹಾಗೂ 2007–08ನೇ ಸಾಲಿನಲ್ಲಿ ಕಡಿಮೆ ಬಿಡುಗಡೆ ಮಾಡಿರುವ ಮೊತ್ತ ರೂ. 14.94 ಲಕ್ಷ ಜೊತೆಗೆ ಕೇಂದ್ರ ಪಾಲಿಗೆ ಎದುರಾಗಿ ರಾಜ್ಯದ ಪಾಲನ್ನು ಬಿಡುಗಡೆ ಮಾಡಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 60 ಕೊಮಂಲೆ 2005(ಭಾಗ), ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2008.**

ವಸತಿ ಇಲಾಖೆಯ ರಾಜ್ಯವಲಯದ ಹಾಗೂ ಕೇಂದ್ರ ಪುರಸ್ಕೃತ ಯೋಜನೆಗಳಿಗೆ ಸಂಬಂಧಿಸಿದಂತೆ, 2008–09ನೇ ಸಾಲಿನ ಮುಂದುವರೆದ ಯೋಜನಾ ಕಾರ್ಯಕ್ರಮಗಳಿಗೆ ಹೊರಡಿಸಿದ ಆದೇಶದಲ್ಲಿ ಕೇಂದ್ರ ಪ್ರಾಯೋಜಿತ ಸಮಗ್ರ ವಸತಿ ಮತ್ತು ಕೊಳಚೆ ಸುಧಾರಣಾ ಕಾರ್ಯಕ್ರಮಕ್ಕಾಗಿ ರೂ. 4574.94 ಲಕ್ಷಗಳ ಸಹಾಯಾನುದಾನ ಲಭ್ಯವಿದ್ದು, ಆರ್ಥಿಕ ಇಲಾಖೆಯು ಅನುಮೋದಿಸಿರುವಂತೆ ರಾಜ್ಯದಲ್ಲಿ ಈ ಕೆಳಕಂಡ ನಗರ/ಪಟ್ಟಣಗಳಲ್ಲಿನ ಐಹೆಚ್ಎಸ್‌ಡಿಪಿ ಯೋಜನೆಗಳ ಅನುಷ್ಠಾನಕ್ಕಾಗಿ ಕೇಂದ್ರದಿಂದ ಬಿಡುಗಡೆಗೊಳಿಸಲಾಗಿರುವ ರೂ. 2301.83 ಹಾಗೂ ರೂ. 1996.13 ಲಕ್ಷ ಅನುದಾನ, 2007–08ನೇ ಸಾಲಿನಲ್ಲಿ ಕಡಿಮೆ ಬಿಡುಗಡೆಗೊಳಿಸಲಾಗಿದ್ದ ರೂ. 14.94 ಲಕ್ಷ ಬಾಕಿ ಅನುದಾನ ಹಾಗೂ ರಾಜ್ಯದ ಪಾಲು ಸೇರಿ ಒಟ್ಟು ರೂ. 4574.94 ಲಕ್ಷ (ರೂಪಾಯಿ ನಲವತ್ತೈದು ಕೋಟಿ ಎಪ್ಪತ್ನಾಲ್ಕು ಲಕ್ಷ ತೊಂಭತ್ನಾಲ್ಕು ಸಾವಿರ ಮಾತ್ರ) ವನ್ನು ಲೆಕ್ಕಶೀರ್ಷಿಕೆ 2217–04–191–2–03 ಯಡಿಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಕಾಲಕಾಲಕ್ಕೆ ಕೇಂದ್ರದಿಂದ ಹೊರಡಿಸುವ ಸೂಚನೆ, ಮಾರ್ಗಸೂಚಿಯನ್ವಯ, ಸಿಎಸ್ಎಂಸಿ ಸಭೆಯ ನಡವಳಿಯ ಸೂಚನೆಯನ್ವಯ, ರಾಜ್ಯ ಎಸ್ಎಲ್ಇಸಿ (ಐಹೆಚ್ಎಸ್‌ಡಿಪಿ) ಸಭೆಯಲ್ಲಿ ಸೂಚಿಸಿರುವ ಸೂಚನೆಗಳನ್ವಯ ನಿಯಮಾನುಸಾರ ಐಹೆಚ್ಎಸ್‌ಡಿಪಿ ಯೋಜನೆಯನ್ನು ಅನುಷ್ಠಾನಗೊಳಿಸಲು ಈ ಕೆಳಕಂಡ ಷರತ್ತಿನೊಂದಿಗೆ ಬಿಡುಗಡೆ ಮಾಡಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ನಗರ/ಪಟ್ಟಣ | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು ಅನುದಾನ (GOI+GOK) | ಷರಾ |
|---|---|---|---|---|---|
| 1 | ಬಳ್ಳಾರಿ | 14.94 | | | (2007–08ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಕಡಿಮೆ ಬಿಡುಗಡೆ ಮಾಡಲಾದ ಕೇಂದ್ರ ಅನುದಾನದ ಬಾಕಿ ಮೊತ್ತದ ಭಾಗ) |
| 2 | ಮುಳಬಾಗಿಲು | | | | |
| 3 | ರಾಮನಗರ | | | | |
| 4 | ಸಿಂಧನೂರು | | | | |
| 5 | ಸವದತ್ತಿ | | | | |

| ಕ್ರ. ಸಂ. | ನಗರ/ಪಟ್ಟಣ | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು ಅನುದಾನ (GOI+GOK) | ಷರಾ |
|---|---|---|---|---|---|
| 6 | ಗಜೇಂದ್ರಘಡ | | | | |
| 7 | ನಂಜನಗೂಡು | | | | |
| 8 | ದೊಡ್ಡಬಳ್ಳಾಪುರ | | | | |
| 9 | ನಾಗಮಂಗಲ | | | | |
| 10 | ಹಾಸನ | | | | |
| 11 | ಹೊಳೆನರಸೀಪುರ | | | | |
| 12 | ಬಸವಕಲ್ಯಾಣ | | | | |
| 13 | ಬೆಳಗಾಂ | 2301.83 | 262.04 | 4574.94 | |
| 14 | ಬಾಲ್ಕಿ | | | | |
| 15 | ಚಿಂಚೋಳಿ | | | | |
| 16 | ಗೌರಿಬಿದನೂರು | | | | |
| 17 | ಗುಲ್ಬರ್ಗಾ | | | | |
| 18 | ಶಹಾಪುರ | | | | |
| 19 | ಶಿಡ್ಲಘಟ್ಟ | | | | |
| 20 | ಕೊಪ್ಪಳ | | | | |
| 21 | ಹುಬ್ಬಳ್ಳಿ | | | | |
| 22 | ಕಡೂರು | | | | |
| 23 | ಗದಗ-ಬೆಟಗೇರಿ | 1996.13 | | | |
| 24 | ಹಿರಿಯೂರು | | | | |
| 25 | ಚಿಂತಾಮಣಿ | | | | |
| | **ಒಟ್ಟು** | **4312.90** | **262.04** | **4574.94** | |

1. ಫಲಾನುಭವಿಗಳಿಂದ ವಂತಿಕೆಯು ನಿಯಮಿತವಾಗಿ ಪಾವತಿಯಾಗುವಂತೆ ಕ್ರಮ ವಹಿಸತಕ್ಕದ್ದು.
2. ಯೋಜನೆಯ ಅನುಷ್ಠಾನದ ಹಂತದ ಬಗ್ಗೆ ಕಾಲಕಾಲಕ್ಕೆ ವರದಿಗಳನ್ನು ರಾಜ್ಯ ಸರ್ಕಾರಕ್ಕೆ/ಕೇಂದ್ರ ಸರ್ಕಾರಕ್ಕೆ ನೀಡತಕ್ಕದ್ದು.
3. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
4. ಸರ್ಕಾರಕ್ಕೆ ಆಡಿಟ್ ವರದಿಯನ್ನು ನಿಗದಿತ ಸಮಯಕ್ಕೆ ಸಲ್ಲಿಸತಕ್ಕದ್ದು.
5. ಈ ಆದೇಶದಲ್ಲಿ ಬಿಡುಗಡೆಗೊಳಿಸಲಾಗಿರುವ ಮೊತ್ತವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ವಸತಿ ಇಲಾಖೆಯ ಉಪ ಕಾರ್ಯದರ್ಶಿಯವರ ಮೇಲು ಸಹಿ ಪಡೆದ ನಂತರ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಎಫ್‌ಡಿ 517 ವೆಚ್ಚ-9/2008, ದಿನಾಂಕ 12-8-2008 ಸೂಚನೆಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1236

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ 2008–09ನೇ ಸಾಲಿನ ಅನುದಾನವನ್ನು ಲೆಕ್ಕಶೀರ್ಷಿಕೆ 2551–01–198–6–02ರ ಅಡಿ ಪುನರ್ ವಿನಿಯೋಗದ ಮೂಲಕ ಭರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಗ್ರಾಅಪ 17 ಪಘಯೋ 2007, ದಿನಾಂಕ 22–4–2008.
2. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ರವರ ಆದೇಶ ಸಂ. ಪಿಸಿ(ಪಿ)19/320/ಎಸ್‌ಸಿಎ/2008–ಡಬ್ಲ್ಯೂಜಿಎಸ್, ದಿನಾಂಕ 30–6–2008.
3. ಹಣಕಾಸು ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಆದೇಶ ಸಂ. ಎಫ್. ನಂ. 44(6) ಪಿಎಫ್I/2008–119 ದಿನಾಂಕ 15–7–2008.

**ಪ್ರಸ್ತಾವನೆ :**

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ 2008–09ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2551–01–198–6–02ರ ಅಡಿ ಒಟ್ಟು ರೂ. 2332.64 ಲಕ್ಷ ಅನುದಾನ ಹಂಚಿಕೆ ಮಾಡಲಾಗಿದ್ದು, ಈ ಪೈಕಿ 2007–08ನೇ ಸಾಲಿನ ಮೂರನೇ ಕಂತಿನ ಬಾಕಿ ಬಾಬ್ತು ಒಟ್ಟು ರೂ. 539.10 ಲಕ್ಷ ಅನುದಾನವನ್ನು ಮೇಲೆ ಓದಲಾದ ಆದೇಶ (1)ರಂತೆ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ ಆದೇಶ (2) ಹಾಗೂ (3)ರ ಅನ್ವಯ ಭಾರತ ಸರ್ಕಾರವು ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಪ್ರಸಕ್ತ ಸಾಲಿನ ಮೊದಲನೇ ಕಂತಿನ ವಿಶೇಷ ಕೇಂದ್ರ ಅನುದಾನದ ನಿಧಿ ಭಾಗದ ಮೊತ್ತವಾಗಿ ರೂ. 1973.70 ಲಕ್ಷ ಅನುದಾನವನ್ನು ರಾಜ್ಯಕ್ಕೆ ಬಿಡುಗಡೆ ಮಾಡಿದೆ. ಈ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಹಾಲಿ ರೂ. 163.96 ಲಕ್ಷ ಅನುದಾನದ ಕೊರತೆ ಇದ್ದು, ಇದನ್ನು ಹೊರತುಪಡಿಸಿ ಉಳಿಕೆ ಒಟ್ಟಾರೆ ಅನುದಾನದಲ್ಲಿ ಅವಕಾಶವಿರುವುದಾಗಿ ಕಂಡುಬಂದರೂ, ಜಿಲ್ಲಾವಾರು ಹಂಚಿಕೆಯಲ್ಲಿ ಅನುದಾನದ ಕೊರತೆ ಕಂಡು ಬಂದಿರುತ್ತದೆ. ಬೆಳಗಾಂ, ಚಾಮರಾಜನಗರ, ಹಾಸನ, ಕೊಡಗು, ಮೈಸೂರು, ಶಿವಮೊಗ್ಗ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳಿಗೆ ಸದರಿ ಮೊದಲನೇ ಕಂತಿನ ಅನುದಾನ ಬಿಡುಗಡೆ ಮಾಡಲು ಕೊರತೆ ಉಂಟಾಗಿರುವ ರೂ. 298.264 ಲಕ್ಷ ಅನುದಾನವನ್ನು ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಸದ್ಯಕ್ಕೆ ಹೆಚ್ಚಿನ ಅನುದಾನ ಹಂಚಿಕೆ ಹೊಂದಿರುವ ಚಿಕ್ಕಮಗಳೂರು, ದಕ್ಷಿಣ ಕನ್ನಡ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗಳಲ್ಲಿ ಉಳಿಯಬಹುದಾದ ಮೊತ್ತದಿಂದ ಪುನರ್ ವಿನಿಯೋಗದ ಮೂಲಕ ನೀಡಬೇಕಾಗಿದೆ ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಡಬ್ಲ್ಯೂಜಿಪಿ 2008 ಬೆಂಗಳೂರು, ದಿನಾಂಕ: 8ನೇ ಆಗಸ್ಟ್ 2008.**

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ 2008–09ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2551–01–198–6–02ರ ಅಡಿ ಬೆಳಗಾಂ, ಚಾಮರಾಜನಗರ, ಹಾಸನ, ಕೊಡಗು, ಮೈಸೂರು, ಶಿವಮೊಗ್ಗ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳಿಗೆ ಅಗತ್ಯವಿರುವ ಒಟ್ಟು ರೂ. 298.264 ಲಕ್ಷಗಳನ್ನು (ಎರಡು ಕೋಟಿ ತೊಂಭತ್ತೆಂಟು ಲಕ್ಷ ಇಪ್ಪತ್ತಾರು ಸಾವಿರದ ನಾಲ್ಕು ನೂರು ರೂಪಾಯಿಗಳು ಮಾತ್ರ) ಚಿಕ್ಕಮಗಳೂರು, ದಕ್ಷಿಣ ಕನ್ನಡ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗಳಲ್ಲಿ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಸದರಿ ಲೆಕ್ಕಶೀರ್ಷಿಕೆಯಡಿ ಲಭ್ಯವಾಗುವ ಅನುದಾನದಿಂದ ಅನುಬಂಧದಲ್ಲಿ (ಪ್ರಪತ್ರ–22ಎ ರಲ್ಲಿ) ತೋರಿಸಿರುವಂತೆ ಪುನರ್ ವಿನಿಯೋಗದ ಮೂಲಕ ಭರಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ: ಗ್ರಾಅಪ 351 ಪಿಬಿಎಸ್ 2008ರ ದಿನಾಂಕ 6–8–2008ರಲ್ಲಿ ಸಹಮತಿಸಿದಂತೆ ಹಾಗೂ ಸರ್ಕಾರದ ಆದೇಶ ಸಂ: ಎಫ್‌ಡಿ 9 ಟಿಎಫ್‌ಪಿ 2004 ದಿನಾಂಕ 7–4–2005ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ದಿನಾಂಕ 8–8–2008ರ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಶಿರೋಳ್**

ನಿರ್ದೇಶಕರು,

ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ ಘಟಕ

ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ**

**2551-01-198-6-02** **ಪ್ರಪತ್ರ 22ಎ-ಕೆಎಫ್‌ಸಿ (ಅನುಚ್ಛೇದ 308)**

**ಆಯವ್ಯಯ ಪತ್ರದಲ್ಲಿ ಅಥವಾ ಹೆಚ್ಚಿನ ಹಣ ಹಂಚಿಕೆ (ಅಲಾಟ್‌ಮೆಂಟ್)ಗಳಲ್ಲಿ ಉಪಬಂಧ ಕಲ್ಪಿಸಿಲ್ಲದ ಎಲ್ಲಾ ವಿನಿಯೋಗಗಳಿಗೆ ಅಥವಾ ಮಂಜೂರಾತಿಗೆ ಲಗತ್ತಿಸಬಬೇಕಾದ ಪುನರ್ವಿನಿಯೋಗದ ವಿವರಣೆ**

**(ರೂ. ಲಕ್ಷಗಳಲ್ಲಿ)**

| ಮುಂಗಡ ಪತ್ರದ ಪ್ರಧಾನ, ಚಿಕ್ಕ, ಉಪ ಮತ್ತು ವಿವರವಾದ ಶೀರ್ಷಿಕೆಗಳು | ಹೆಚ್ಚಿಸಲು ಪ್ರಸ್ತವಿಸಲಾದ ಅಂದಾಜಿನ ಶೀರ್ಷಿಕೆ 2551-01-198-6-02 | | | | ಕಡಿಮೆ ಮಾಡಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ 2551-01-198-6-02 | | | | ಷರಾ ಹಣ ಹಂಚಿಕೆ (ಅಲಾಟ್‌ಮೆಂಟ್) ಮೀರಿರುವುದಕ್ಕೆ ಮತ್ತು ಉಳಿತಾಯ ನಿರೀಕ್ಷಿಸುವುದಕ್ಕೆ ಕಾರಣಗಳನ್ನು ಇಲ್ಲಿ ಪೂರ್ಣವಾಗಿ ವಿವರಿಸಬೇಕು |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 2551-01-198-6-02 | | | | | | | | | ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನವನ್ನು ಮರು ಬಿಡುಗಡೆ ಮಾಡಲು ಕೆಲವು ಜಿಲ್ಲೆಗಳಿಗೆ ಹೆಚ್ಚುವರಿ ಅನುದಾನ ಬೇಕಾಗಿರುತ್ತದೆ. |
| 1. ಶಿವಮೊಗ್ಗ -405 | 289.100 | 67.275 | 277.054 | 55.229 | | | | | |
| 2. ಮೈಸೂರು -407 | 45.000 | 20.093 | 65.441 | 40.534 | | | | | |
| 3. ಹಾಸನ -410 | 169.100 | 54.675 | 149.614 | 35.189 | | | | | |
| 4. ಕೊಡಗು -411 | 183.950 | 40.500 | 167.332 | 23.882 | | | | | |
| 5. ಬೆಳಗಾಂ -413 | 192.000 | 67.275 | 155.821 | 31.096 | | | | | |
| 6.ಚಾಮರಾಜನಗರ -456 | 59.000 | 52.275 | 58.185 | 51.460 | | | | | |
| 7. ಉಡುಪಿ -457 | 180.000 | 40.500 | 200.374 | 60.874 | | | | | |
| **ಒಟ್ಟು** | | | | **298.264** | | | | | |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 1. ಚಿಕ್ಕಮಗಳೂರು –408 | | | | | 299.000 | 5.855 | 186.536 | 106.609 | ಕೇಂದ್ರ ಸರ್ಕಾರದಿಂದ ಈಗಾಗಲೇ ಬಿಡುಗಡೆಯಾಗಿರುವ ಹಣವನ್ನು ಮರು ಬಿಡುಗಡೆ ಮಾಡಲು ಈ ಜಿಲ್ಲೆಗಳಲ್ಲಿ ಲಭ್ಯವಿರುವ ಅನುದಾನದಿಂದ ಪುನರ್ವಿನಿಯೋಗ ಮಾಡಬಹುದು. |
| 2. ದಕ್ಷಿಣ ಕನ್ನಡ –409 | | | | | 250.000 | 40.500 | 139.253 | 70.247 | |
| 3. ಧಾರವಾಡ –415 | | | | | 65.490 | 0.780 | 45.360 | 19.343 | |
| 4. ಉತ್ತರ ಕನ್ನಡ –416 | | | | | 600.00 | 149.365 | 348.570 | 102.065 | |
| ಒಟ್ಟು | | | | | | | | **298.264** | |

**ಎ.ಎಸ್. ಶ್ರೀಕಾಂತ್**
ಸರ್ಕಾರದ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1237

**ವಿಷಯ :** ರಾಮನಗರ ಜಿಲ್ಲಾ ಪಂಚಾಯಿತಿಯಲ್ಲಿ "ಜಿಲ್ಲಾ ಗ್ರಾಮೀಣಾಭಿವೃದ್ಧಿ ಆಡಳಿತ"ದ ಅಡಿಯಲ್ಲಿ "ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಕೋಶವನ್ನು" ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂ. ಆರ್‌ಡಿಪಿ 169 ಜಡ್‌ಪಿಎಸ್ 2007, ದಿನಾಂಕ 21–8–07.
2. ಸರ್ಕಾರಿ ಆದೇಶ ಸಂ: ಗ್ರಾಅಪ 179: ಕೆಎಸ್‌ಎಸ್ 2007(1), ದಿನಾಂಕ 22–8–07.
3. ಸರ್ಕಾರಿ ಅಧಿಸೂಚನೆ ಸಂ. ಆರ್‌ಡಿಪಿ 179 ಕೆಎಸ್‌ಎಸ್ 07, ದಿನಾಂಕ 3–9–07.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 21–8–07ರ ಅಧಿಸೂಚನೆಯಲ್ಲಿ ನೂತನವಾಗಿ ಸೃಜನೆಗೊಂಡ ರಾಮನಗರ ಜಿಲ್ಲೆಯಲ್ಲಿ ಹೊಸ ಜಿಲ್ಲಾ ಪಂಚಾಯಿತಿಯನ್ನು ರಚಿಸಲಾಗಿರುತ್ತದೆ. ಅದರಂತೆ ಮೇಲೆ ಓದಲಾದ (2)ರ ಆದೇಶದಲ್ಲಿ ರಾಮನಗರ ಜಿಲ್ಲಾ ಪಂಚಾಯಿತಿ ಕಛೇರಿಗೆ ಹುದ್ದೆಗಳನ್ನು ಸೃಜಿಸಲಾಗಿದೆ.

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಪ್ರತಿ ಜಿಲ್ಲಾ ಪಂಚಾಯಿತಿಯಲ್ಲಿ ಜಿಲ್ಲಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಕೋಶವನ್ನು ಸ್ಥಾಪಿಸುವ ಬಗ್ಗೆ ಹೊರಡಿಸಿರುವ ಮಾರ್ಗಸೂಚಿಯನ್ವಯ ನೂತನವಾಗಿ ಸೃಜನೆಗೊಂಡ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿಯೂ ಪ್ರತ್ಯೇಕವಾಗಿ ಜಿಲ್ಲಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಕೋಶಗಳನ್ನು ರಚಿಸಿ ಮೇಲೆ (3)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಆದೇಶಿಸಲಾಗಿದೆ. ಸದರಿ ಕೋಶಕ್ಕೆ ಬೆಂಬಲ ಸಿಬ್ಬಂದಿಯ ಅವಶ್ಯಕತೆ ಇರುವುದರಿಂದ, ಹಿಂದೆ 27 ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಕೋಶಗಳಿಗೆ ಹುದ್ದೆಗಳನ್ನು ಮಂಜೂರು ಮಾಡಿರುವ ಮಾದರಿಯಲ್ಲಿ ರಾಮನಗರ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಕೋಶ (DRDA Cell)ಕ್ಕೂ ಸಹ ಹುದ್ದೆಗಳನ್ನು ಸೃಜಿಸಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 179 ಕೆಎಸ್ಎಸ್ 2007 (1) ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ರಾಮನಗರ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಕೋಶಕ್ಕೆ (DRDA Cell) ಅನುಬಂಧದ ಕಲಂ (4)ರಲ್ಲಿ ತೋರಿಸಿರುವ ಹುದ್ದೆಗಳನ್ನು ಸೃಜಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ 6–8–2008ರ ಟಿಪ್ಪಣಿ ಸಂ. ಆಇ 322 ವೆಚ್ಚ 6/2008ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಯು. ಶಿವಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 179 ಕೆಎಸ್ಎಸ್ 07(1) ದಿನಾಂಕ: 29ನೇ ಆಗಸ್ಟ್ 2008ಕ್ಕೆ ಅನುಬಂಧ**

**ರಾಮನಗರ ಜಿಲ್ಲಾ ಪಂಚಾಯತಿ ಜಿಲ್ಲಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಕೋಶದ (DRDA Cell) ವೃಂದ ಬಲ**

| ಕ್ರ.ಸಂ. | ಹುದ್ದೆಯ ಹೆಸರು | ವೇತನ ಶ್ರೇಣಿ | ನೂತನ ರಾಮನಗರ ಜಿ.ಪಂ.ಗೆ ಸೃಜಿಸಲಾಗುತ್ತಿರುವ ಹುದ್ದೆಗಳ ಸಂಖ್ಯೆ |
|---|---|---|---|
| 1 | ಯೋಜನಾ ನಿರ್ದೇಶಕರು (ಡಿಆರ್‌ಡಿಎ ಕೋಶ) | 20025–28275 | 1 |
| 2 | ಕಾರ್ಯನಿರ್ವಾಹಕ ಇಂಜಿನಿಯರ್ (ಡಿಆರ್‌ಡಿಎ ಕೋಶ) | 18150–26925 | 1 |
| 3 | ಲೆಕ್ಕಾಧಿಕಾರಿ (ಡಿಆರ್‌ಡಿಎ ಕೋಶ) | 14050–25050 | 1 |
| 4 | ಸಹಾಯಕ ಯೋಜನಾಧಿಕಾರಿ (ಡಿಆರ್‌ಡಿಎ ಕೋಶ) | 14050–25050 | 1 |
| 5 | ತಾಂತ್ರಿಕ ಸಹಾಯಕರು/ ಸಹಾಯಕ ಅಭಿಯಂತರರು (ಡಿಆರ್‌ಡಿಎ ಕೋಶ) | 11400–21600 | 1 |
| 6 | I. ಅಧೀಕ್ಷಕರು (ಡಿಆರ್‌ಡಿಎ ಕೋಶ) | 10000–18150 | 1 |
| 7 | II. ಲೆಕ್ಕಾಧೀಕ್ಷಕರು (ಡಿಆರ್‌ಡಿಎ ಕೋಶ) | 10800–20025 | |
| 8 | ಕಿರಿಯ ಇಂಜಿನಿಯರ್ (ಡಿಆರ್‌ಡಿಎ ಕೋಶ) | 8825–16000 | 3 |
| 9 | ಸಹಾಯಕ ಸಾಂಖ್ಯಿಕ ಅಧಿಕಾರಿ (ಡಿಆರ್‌ಡಿಎ ಕೋಶ) | 8825–16000 | 1 |
| 10 | ಪ್ರಥಮ ದರ್ಜೆ ಸಹಾಯಕ (ಡಿಆರ್‌ಡಿಎ ಕೋಶ) | 7275–13350 | 8 |
| 11 | ಶೀಘ್ರಲಿಪಿಗಾರರು (ಡಿಆರ್‌ಡಿಎ ಕೋಶ) | 7275–13350 | 2 |
| 12 | ದ್ವಿತೀಯ ದರ್ಜೆ ಸಹಾಯಕರು (ಡಿಆರ್‌ಡಿಎ ಕೋಶ) | 5800–10500 | 8 |
| 13 | ಬೆರಳಚ್ಚುಗಾರರು (ಡಿಆರ್‌ಡಿಎ ಕೋಶ) | 5800–10500 | 4 |
| 14 | ವಾಹನ ಚಾಲಕರು (ಡಿಆರ್‌ಡಿಎ ಕೋಶ) | 5800–10500 | 3 |
| 15 | ಗ್ರೂಪ್ 'ಡಿ' (ಡಿಆರ್‌ಡಿಎ ಕೋಶ) | 4800–7275 | 4 |
| | **ಒಟ್ಟು** | | **41** |

**ಎಸ್.ಯು. ಶಿವಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್.1276

**ವಸತಿ ಸಚಿವಾಲಯ**

**ವಿಷಯ :** ನರ್ಮ್‌ನ ಬಿಎಸ್‌ಯುಪಿ ಯೋಜನೆಯ ಮೊದಲನೇ ಹಂತದಲ್ಲಿ ಬೆಂಗಳೂರು ನಗರದಲ್ಲಿನ ಕೊಳಚೆ ಪ್ರದೇಶಗಳಲ್ಲಿ ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಿಸುವ ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮಕ್ಕೆ ವಹಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 18–3–2008 ಹಾಗೂ 28–5–2008ರಂದು ನಡೆದ ಎಸ್‌ಎಲ್‌ಇಸಿ (ಬಿಎಸ್‌ಯುಪಿ) ಸಭೆಯ ನಡವಳಿ.
2. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರ ಸಂಖ್ಯೆ: ಕಕೊನಿಮ: ಆಯುಕ್ತರು:ತಾಂಶಾ:ನರ್ಮ್/ಬಿಎಸ್‌ಯುಪಿ–ಹಂತ–1:ಬೆಂಗಳೂರು:2007–08:1248, ದಿನಾಂಕ 28–3–2008.
3. ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ) ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ಲೋಇ:284: ಆಕೋ–3/08, ದಿನಾಂಕ 17–7–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ನಡವಳಿಯಂತೆ, ಎಸ್‌ಎಲ್‌ಇಸಿ (ಬಿಎಸ್‌ಯುಪಿ) ಸಭೆಯಲ್ಲಿ, ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರಿಗೆ ಬೆಂಗಳೂರು ಬಿಎಸ್‌ಯುಪಿ ಮೊದಲ ಹಂತದ ಯೋಜನೆಯ ವಸತಿ ಹಾಗೂ ಮೂಲಭೂತ ಸೌಲಭ್ಯಗಳನ್ನು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮಕ್ಕೆ ವಹಿಸುವ ಮೊದಲು ಕೆಟಿಪಿಪಿ ನಿಯಮದಿಂದ ವಿನಾಯಿತಿ ಪಡೆಯುವ ಬಗ್ಗೆ ಕ್ರಮ ವಹಿಸಲು ಸೂಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಸರ್ಕಾರಕ್ಕೆ ಬರೆದಿರುವ ಪತ್ರದಲ್ಲಿ ನರ್ಮ್–ಬಿಎಸ್‌ಯುಪಿ ಯೋಜನೆಯಡಿ ಬೆಂಗಳೂರು ನಗರದ ಮೊದಲನೇ ಹಂತದಲ್ಲಿ ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯ ಒದಗಿಸುವ ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮಕ್ಕೆ ರೂ. 1.80 ಲಕ್ಷಗಳ ಘಟಕ ವೆಚ್ಚದಂತೆ ವಹಿಸಲು ಕ್ರಮವಾಗಿ ದಿನಾಂಕ 18–3–2008 ಮತ್ತು 28–5–2008ರಂದು ನಡೆದ ಸಭೆಯಲ್ಲಿ ತೀರ್ಮಾನಿಸಲಾಗಿರುವುದರಿಂದ, ಸದರಿ ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮಕ್ಕೆ ವಹಿಸುವ ಬಗ್ಗೆ ಕೆಟಿಪಿಪಿ ಕಾಯ್ದೆಯಲ್ಲಿ ವಿನಾಯಿತಿ ನೀಡುವ ಬಗ್ಗೆ ಸರ್ಕಾರದ ಆದೇಶವನ್ನು ನೀಡಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಅಧಿಸೂಚನೆಯಲ್ಲಿ ಆರ್ಥಿಕ ಇಲಾಖೆಯು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮಕ್ಕೆ ಕೇಂದ್ರ ಪುರಸ್ಕೃತ ನರ್ಮ್ ಯೋಜನೆಯ ಬಿಎಸ್‌ಯುಪಿ ಮೊದಲ ಹಂತದ ಯೋಜನೆಯಡಿ ಬೆಂಗಳೂರು ನಗರದ ಕೊಳಚೆ ಪ್ರದೇಶಗಳಲ್ಲಿ ಮನೆಗಳ ನಿರ್ಮಾಣದ ಕಾಮಗಾರಿಗಳನ್ನು ರೂ. 1.80 ಲಕ್ಷಗಳ ವೆಚ್ಚದಲ್ಲಿ ನಿರ್ವಹಿಸಲು ನೇರವಾಗಿ ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮಕ್ಕೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ವಸತಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿರುತ್ತದೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 10 ಕೊಮಂಲೆ 2008 ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2008**.

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಿಮ 1999ರ ಕಲಂ 4(ಜಿ)ರಡಿ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿರುವುದರಿಂದ ಕೇಂದ್ರ ಪುರಸ್ಕೃತ ನರ್ಮ್ ಯೋಜನೆಯ ಬಿಎಸ್‌ಯುಪಿ ಮೊದಲ ಹಂತದ ಯೋಜನೆಯಡಿ ಬೆಂಗಳೂರು ನಗರದ ಕೊಳಚೆ ಪ್ರದೇಶಗಳಲ್ಲಿ ಮನೆಗಳ ನಿರ್ಮಾಣ ಮತ್ತು ಮೂಲಭೂತ ಸೌಲಭ್ಯದ ಕಾಮಗಾರಿಗಳನ್ನು (ಪ್ರತಿ ಮನೆಗೆ ಘಟಕ ವೆಚ್ಚ ರೂ. 1.80 ಲಕ್ಷಗಳ ವೆಚ್ಚದಲ್ಲಿ) ನಿರ್ವಹಿಸಲು ಕರ್ನಾಟಕ ರಾಜ್ಯ ಪೊಲೀಸ್ ವಸತಿ ನಿಗಮಕ್ಕೆ ವಹಿಸಲು ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1235

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಬೈಫ್ ಸಂಸ್ಥೆವತಿಯಿಂದ ನಡೆಸುತ್ತಿರುವ ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಮುಂದುವರೆಸಲು ಮತ್ತು ಸೇವಾ ವೆಚ್ಚವನ್ನು ಹೆಚ್ಚಿಸುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ.18.ಎಸ್ಇಪಿ.ಇತರೆ 2005, ದಿನಾಂಕ 25–9–2007.

2. ರಾಜ್ಯ ಮಟ್ಟದ SLRC ಪರಿಶೀಲನಾ ಸಭೆ ದಿನಾಂಕ 5–7–2008.

**ಪ್ರಸ್ತಾವನೆ :**

ಉಲ್ಲೇಖಿತ (1)ರ ಸರ್ಕಾರದ ಆದೇಶದಲ್ಲಿ ಬೈಫ್ ಸಂಸ್ಥೆಯ ವತಿಯಿಂದ ನಡೆಸುತ್ತಿರುವ ಕೃತಕ ಗರ್ಭಧಾರಣೆ ಕೇಂದ್ರಗಳನ್ನು ದಿನಾಂಕ 1–4–2007 ರಿಂದ 31–3–2008 ರವರೆಗೆ ಮುಂದುವರೆಸಲು ಮತ್ತು ಆ ಕೇಂದ್ರಗಳಿಗೆ ನೀಡುವ ನಿರ್ವಹಣಾ ವೆಚ್ಚವನ್ನು ಹೆಚ್ಚಿಸಲು ಮಂಜೂರಾತಿ ನೀಡಲಾಗಿದೆ. ಆದರೆ, ಈ ಕೇಂದ್ರಗಳನ್ನು ದಿನಾಂಕ 1–4–2008ರಿಂದ ಮುಂದುವರೆಸಲು ಮತ್ತು ಸೇವಾ ವೆಚ್ಚವನ್ನು ಹೆಚ್ಚಿಸಲು ಬೈಫ್ ಸಂಸ್ಥೆಯು ಕೋರಿರುತ್ತದೆ. ಎಸ್‌ಜಿಎಸ್‌ವೈ ಮೂಲಭೂತ ಸೌಕರ್ಯ ನಿಧಿಯಿಂದ ರೂ. 1,62,000/–ಗಳನ್ನು ನಿರ್ವಹಣಾ ವೆಚ್ಚವಾಗಿ ನೀಡಿರುತ್ತದೆ. ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಲ್ಲಿ ವರ್ಷವಾರು ಅನುದಾನ ಬರುತ್ತಿದ್ದು ಈ ಕೇಂದ್ರಗಳನ್ನು ಪ್ರತಿ ವರ್ಷ ನವೀಕರಿಸಬೇಕಾಗುತ್ತದೆ. ಈ ವಿಷಯವಾಗಿ 72 ಕೇಂದ್ರಗಳಿರುವ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್‌ರವರ ಅಭಿಪ್ರಾಯವನ್ನು ಕೇಳಲಾಗಿರುತ್ತದೆ. ಆದರೆ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳವರಿಂದ ವರದಿ ಬಂದಿರುವುದಿಲ್ಲ. ಆದರೂ ಸಹ ಉಲ್ಲೇಖಿತ (2) ರನ್ವಯ ದಿನಾಂಕ 4–7–2008ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರವರ ಅಧ್ಯಕ್ಷತೆಯಲ್ಲಿ ನಡೆದ SLRC ಸಭೆಯಲ್ಲಿ ಈ ಕೇಂದ್ರಗಳನ್ನು ದಿನಾಂಕ 1–4–2008ರಿಂದ ಮುಂದುವರಿಸಲು ಮತ್ತು ಕೇಂದ್ರಗಳ ನಿರ್ವಹಣಾ ವೆಚ್ಚವನ್ನು 1,87,500–00 ಗಳಂತೆ ಪ್ರತಿ ಕೇಂದ್ರಕ್ಕೆ ಪ್ರತಿ ವರ್ಷಕ್ಕೆ ಶೇಕಡಾ 5ರಷ್ಟು ಏರು ಬೆಲೆಯಲ್ಲಿ ಹೆಚ್ಚಿಸುವುದಕ್ಕೆ ತೀರ್ಮಾನಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 18 ಎಸ್‌ಇಪಿ(ಇತರೆ) 2005 ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2008.**

ಬೈಫ್ ಸಂಸ್ಥೆಯ ವತಿಯಿಂದ ನಿರ್ವಹಿಸುತ್ತಿರುವ 72 ಕೃತಕ ಗರ್ಭಧಾರಣೆ (ಅನುಬಂಧ–1). ಕೇಂದ್ರಗಳನ್ನು ದಿನಾಂಕ 1–4–2008 ರಿಂದ ಜಾರಿಗೆ ಬರುವಂತೆ 31–3–2009 ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಪ್ರತಿಯೊಂದು ಕೇಂದ್ರದ ನಿರ್ವಹಣಾ ವೆಚ್ಚ ಅಂದರೆ ಮೇಲೆ ನಿಗಧಿಪಡಿಸಿದ ಅವಧಿಗೆ ರೂ. 1,87,500/–ಗಳನ್ನು ಹಾಗೂ ಪ್ರತಿ ವರ್ಷ ಶೇಕಡಾ 5ರಷ್ಟು ಏರು ಬೆಲೆ ಹೆಚ್ಚಿಸಿರುವುದಕ್ಕೂ ಸಹ ಸರ್ಕಾರವು ಮಂಜೂರಾತಿ ನೀಡಿದೆ.

ಬಡತನ ರೇಖೆಗೆ ಒಳಪಡುವ ಫಲಾನುಭವಿಗಳಿಂದ ರೂ. 15/– ಮತ್ತು ಬಡತನ ರೇಖೆಗೆ ಒಳಪಡದೇ ಇರುವ ಫಲಾನುಭವಿಗಳಿಂದ ರೂ. 25/–ಗಳ ಸೇವಾ ವೆಚ್ಚವನ್ನು ವಸೂಲಿ ಮಾಡಿ ಸಂಬಂಧಪಟ್ಟ ಜಿಲ್ಲೆಗಳ ಪಶು ಸಂಗೋಪನಾ ಇಲಾಖೆಯ ಉಪ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಜಮಾ ಮಾಡಬೇಕಾಗಿರುತ್ತದೆ. ಬೈಫ್ ಕೇಂದ್ರಗಳು ನಕಲಿಯಾಗದಂತೆ ಎಚ್ಚರ ವಹಿಸಲು ಸೂಚಿಸಿದೆ. ಈ ಕುರಿತು ಬೈಫ್ ಸಂಸ್ಥೆಯು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಯೊಂದಿಗೆ ಮಾರ್ಪಡಿಸಿದ ಕರಾರು ಒಪ್ಪಂದವನ್ನು ದಿನಾಂಕ 1–4–2008 ರಿಂದ ಜಾರಿಗೆ ಬರುವಂತೆ 31–3–2009 ರವರೆಗೆ ಮಾಡಿಕೊಳ್ಳುವುದು.

ಸದರಿ ಕೇಂದ್ರಗಳಿಗೆ ಹಣ ಬಿಡುಗಡೆ ಮಾಡುವ ಮುನ್ನ ಯೋಜನಾ ನಿರ್ದೇಶಕರು, ಡಿಆರ್‌ಡಿಎ ರವರು ಖುದ್ದಾಗಿ ಬೈಫ್ ಕೇಂದ್ರಗಳಿಗೆ ಭೇಟಿ ನೀಡಿ ಪ್ರಗತಿ ಪರಿಶೀಲಿಸಿ ನಂತರ ಹಣ ಬಿಡುಗಡೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ಶ್ರೀಕಾಂತ್**

ಸರ್ಕಾರದ ಕಾರ್ಯದರ್ಶಿ (ಪಂ.ರಾಜ್),

ಗ್ರಾಮ್ಭಿಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಅನುಬಂಧ-1

### ಬೈಫ್ ಕೃತಕ ಗರ್ಭಧಾರಣೆ ಕೇಂದ್ರಗಳು ನಡೆಯುತ್ತಿರುವ ಸ್ಥಳಗಳು

| ಕ್ರ.ಸಂ. | ಕೇಂದ್ರದ ಹೆಸರು | ಪ್ರಾಯೋಜಕರು |
|---|---|---|
| 1 | ಹಗರಿಗಜಾಪುರ | ಜಿಲ್ಲಾ ಪಂಚಾಯತ್, ದಾವಣಗೆರೆ |
| 2 | ಮೈದೂರು | ಜಿಲ್ಲಾ ಪಂಚಾಯತ್, ದಾವಣಗೆರೆ |
| 3 | ಕೊಂಡಲಹಳ್ಳಿ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 4 | ಮುದ್ದಾಪುರ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 5 | ಐಕ್ಕಯಾಗಟ್ಟಿ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 6 | ರಂಗೇನಹಳ್ಳಿ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 7 | ಬಂಡೆಬೊಮ್ಮನಹಳ್ಳಿ | ಜಿಲ್ಲಾ ಪಂಚಾಯತ್, ಚಿತ್ರದುರ್ಗ |
| 8 | ಕಲಿಯೂರು | ಜಿಲ್ಲಾ ಪಂಚಾಯತ್, ಮೈಸೂರು |
| 9 | ಹುಂಡಿಮಾಲಾ | ಜಿಲ್ಲಾ ಪಂಚಾಯತ್, ಮೈಸೂರು |
| 10 | ಹೆಬ್ಬಲಗುಪ್ಪೆ | ಜಿಲ್ಲಾ ಪಂಚಾಯತ್, ಮೈಸೂರು |
| 11 | ಹಿರೇಜಾವೂರು | ಜಿಲ್ಲಾ ಪಂಚಾಯತ್, ರಾಯಚೂರು |
| 12 | ಹರವಿ | ಜಿಲ್ಲಾ ಪಂಚಾಯತ್, ರಾಯಚೂರು |
| 13 | ಬಿಗಭಾವಿ | ಜಿಲ್ಲಾ ಪಂಚಾಯತ್, ರಾಯಚೂರು |
| 14 | ಹಿರೇ ಅರಳಿಹಳ್ಳಿ | ಜಿಲ್ಲಾ ಪಂಚಾಯತ್, ಕೊಪ್ಪಳ |
| 15 | ಮಸಬಂಜಿನಾಳ | ಜಿಲ್ಲಾ ಪಂಚಾಯತ್, ಕೊಪ್ಪಳ |
| 16 | ಬೂದಿಗುಂಪಾ | ಜಿಲ್ಲಾ ಪಂಚಾಯತ್, ಕೊಪ್ಪಳ |
| 17 | ಸಂಗಾಪುರ | ಜಿಲ್ಲಾ ಪಂಚಾಯತ್, ಕೊಪ್ಪಳ |
| 18 | ಹಿರೇಬಗನಾಳ | ಜಿಲ್ಲಾ ಪಂಚಾಯತ್, ಕೊಪ್ಪಳ |
| 19 | ಮಾನ್ಯರ-ಮಸನವಾಡೆ | ಜಿಲ್ಲಾ ಪಂಚಾಯತ್, ಬಳ್ಳಾರಿ |
| 20 | ಕೋಳುರು | ಜಿಲ್ಲಾ ಪಂಚಾಯತ್, ಬಳ್ಳಾರಿ |
| 21 | ತಾಳೂರು | ಜಿಲ್ಲಾ ಪಂಚಾಯತ್, ಬಳ್ಳಾರಿ |
| 22 | ಉಲವತ್ತಿ | ಜಿಲ್ಲಾ ಪಂಚಾಯತ್, ಬಳ್ಳಾರಿ |
| 23 | ಜಿ. ಕೋಡಿಹಳ್ಳಿ | ಜಿಲ್ಲಾ ಪಂಚಾಯತ್, ಬಳ್ಳಾರಿ |
| 24 | ಕಿಬ್ಬನಹಳ್ಳಿ | ಜಿಲ್ಲಾ ಪಂಚಾಯತ್, ತುಮಕೂರು |
| 25 | ಎಸ್. ಲಕ್ಕಿಹಳ್ಳಿ | ಜಿಲ್ಲಾ ಪಂಚಾಯತ್, ತುಮಕೂರು |
| 26 | ಬೆಂಗರಹಳ್ಳಿ | ಜಿಲ್ಲಾ ಪಂಚಾಯತ್, ತುಮಕೂರು |
| 27 | ಎಸ್. ಬಿದರೆ | ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು |
| 28 | ಅಣ್ಣೀಗೆರೆ | ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು |
| 29 | ಶಿರಬೂರ್ | ಜಿಲ್ಲಾ ಪಂಚಾಯತ್, ಬಿಜಾಪುರ |
| 30 | ಹುಣಸಿಯಾಳ್ ಪಿ.ಬಿ. | ಜಿಲ್ಲಾ ಪಂಚಾಯತ್, ಬಿಜಾಪುರ |

| ಕ್ರ.ಸಂ. | ಕೇಂದ್ರದ ಹೆಸರು | ಪ್ರಾಯೋಜಕರು |
|---|---|---|
| 31 | ಮುಧೋಳ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 32 | ಹನಗಂಡಿ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 33 | ಯಲ್ಲಟ್ಟಿ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 34 | ಖಾನಪೂರ ಎಸ್.ಕೆ. | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 35 | ಲೋಕಾಪುರ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 36 | ಪಿ.ಡಿ. ಬುದ್ನಿ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 37 | ಯಡಹಳ್ಳಿ | ಜಿಲ್ಲಾ ಪಂಚಾಯತ್, ಬಾಗಲಕೋಟೆ |
| 38 | ಮಲ್ಲಾಬಾದ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 39 | ಜೀವಣಗಿ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 40 | ಶಿರಡೋಣ್ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 41 | ನೀರ್ಗುಡಿ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 42 | ಬೆಟಜೇವರಗಿ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 43 | ಅಳಂಗಾ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 44 | ಹಳ್ಳಿಸಲಗಾರ್ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 45 | ಲಾಡ–ಚಿಂಚೋಳ್ಳಿ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 46 | ದರ್ಗಾಶಿರೂನ್ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 47 | ನಂದಿಕೂರ್ | ಜಿಲ್ಲಾ ಪಂಚಾಯತ್, ಗುಲ್ಬರ್ಗ |
| 48 | ಏಕ್ಕಂಬಾ | ಜಿಲ್ಲಾ ಪಂಚಾಯತ್, ಬೀದರ್ |
| 49 | ಹಿಪ್ಪರಗಾಂವ್ | ಜಿಲ್ಲಾ ಪಂಚಾಯತ್, ಬೀದರ್ |
| 50 | ಅಣದೂರು | ಜಿಲ್ಲಾ ಪಂಚಾಯತ್, ಬೀದರ್ |
| 51 | ಸಿದ್ಧೇಶ್ವರ | ಜಿಲ್ಲಾ ಪಂಚಾಯತ್, ಬೀದರ್ |
| 52 | ಹೊಳೇಸಮುದ್ರ | ಜಿಲ್ಲಾ ಪಂಚಾಯತ್, ಬೀದರ್ |
| 53 | ಬೆಳ್ಳೂರು | ಜಿಲ್ಲಾ ಪಂಚಾಯತ್, ಮಂಡ್ಯ |
| 54 | ಜಕ್ಕಲಿ | ಜಿಲ್ಲಾ ಪಂಚಾಯತ್, ಗದಗ್ |
| 55 | ಗೊಜನೂರು | ಜಿಲ್ಲಾ ಪಂಚಾಯತ್, ಗದಗ್ |
| 56 | ಬಿಂಕದಕಟ್ಟಿ | ಜಿಲ್ಲಾ ಪಂಚಾಯತ್, ಗದಗ್ |
| 57 | ಕೊರಲಹಳ್ಳಿ | ಜಿಲ್ಲಾ ಪಂಚಾಯತ್, ಗದಗ್ |
| 58 | ಪ್ರಧಾನಿ | ಜಿಲ್ಲಾ ಪಂಚಾಯತ್, ಉತ್ತರ ಕನ್ನಡ |
| 59 | ಅಚವೆ | ಜಿಲ್ಲಾ ಪಂಚಾಯತ್, ಉತ್ತರ ಕನ್ನಡ |
| 60 | ಸಂತೆಗುಳಿ | ಜಿಲ್ಲಾ ಪಂಚಾಯತ್, ಉತ್ತರ ಕನ್ನಡ |
| 61 | ಬುಡಲ | ಜಿಲ್ಲಾ ಪಂಚಾಯತ್, ಉತ್ತರ ಕನ್ನಡ |
| 62 | ಗರಗನಹಳ್ಳಿಗೇಟ್ | ಜಿಲ್ಲಾ ಪಂಚಾಯತ್, ಚಾಮರಾಜನಗರ |

| ಕ್ರ.ಸಂ. | ಕೇಂದ್ರದ ಹೆಸರು | ಪ್ರಾಯೋಜಕರು |
|---|---|---|
| 63 | ಅಜ್ಜಿಪುರ | ಜಿಲ್ಲಾ ಪಂಚಾಯತ್, ಚಾಮರಾಜನಗರ |
| 64 | ಗಂಜಿಯಾಪುರ | ಜಿಲ್ಲಾ ಪಂಚಾಯತ್, ಧಾರವಾಡ |
| 65 | ಚೇವರಹುಬ್ಬಳ್ಳಿ | ಜಿಲ್ಲಾ ಪಂಚಾಯತ್, ಧಾರವಾಡ |
| 66 | ನಾಯ್ಕನೂರು | ಜಿಲ್ಲಾ ಪಂಚಾಯತ್, ಧಾರವಾಡ |
| 67 | ಸೋಮನಕಟ್ಟೆ | ಜಿಲ್ಲಾ ಪಂಚಾಯತ್, ಹಾವೇರಿ |
| 68 | ಹೊಸ ಹಲಸೂರು | ಜಿಲ್ಲಾ ಪಂಚಾಯತ್, ಹಾವೇರಿ |
| 69 | ಬಿಲ್ಲಹಳ್ಳಿ | ಜಿಲ್ಲಾ ಪಂಚಾಯತ್, ಹಾವೇರಿ |
| 70 | ಶಿಶುವಿನಾಳ | ಜಿಲ್ಲಾ ಪಂಚಾಯತ್, ಹಾವೇರಿ |
| 71 | ಬೆಂಡೇಕೆರೆ | ಜಿಲ್ಲಾ ಪಂಚಾಯತ್, ಹಾಸನ |
| 72 | ಸಂತೆ ಸಿವಾರ | ಜಿಲ್ಲಾ ಪಂಚಾಯತ್, ಹಾಸನ |

**ಎ.ಎಸ್. ಶ್ರೀಕಾಂತ್**

ಪಿ.ಆರ್.1231

ಸರ್ಕಾರದ ಕಾರ್ಯದರ್ಶಿ (ಪಂ.ರಾಜ್),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶಿಕ್ಷಣ ಇಲಾಖೆಯಲ್ಲಿನ ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿನ ಕಿರಿಯ ಸಹಾಯಕ ಹುದ್ದೆಯನ್ನು ನೂತನವಾಗಿ ಸೃಜಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 119 ಟಿಪಿಇ 2008, ದಿನಾಂಕ 10–7–2008.

**ಪ್ರಸ್ತಾವನೆ :**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) ಇವರು ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯ ತಾಂತ್ರಿಕ ಶಿಕ್ಷಣ ಶಾಖೆಯಲ್ಲಿ ಈ ಹಿಂದೆ ಶೇಕಡ 5ರ ಸಿಬ್ಬಮದಿ ಕಡಿತದ ಕಾರ್ಯನೀತಿಯನ್ವಯ ರದ್ದಾಗಿರುವ ಕಿರಿಯ ಸಹಾಯಕರ ಹುದ್ದೆಯ ಬದಲಿಗೆ, ಪ್ರಸ್ತುತ ನೂತನವಾಗಿ ಒಂದು ಕಿರಿಯ ಸಹಾಯಕರ ಹುದ್ದೆಯನ್ನು ಸೃಜಿಸುವಂತೆ ಸಕಾರಣಗಳೊಂದಿಗೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 155 ಅಕಿಸೇ 2007 ಬೆಂಗಳೂರು, ದಿನಾಂಕ: 19ನೇ ನವೆಂಬರ್ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಉನ್ನತ ಶಿಕ್ಷಣ ಇಲಾಖೆಯಲ್ಲಿನ ತಾಂತ್ರಿಕ ಶಿಕ್ಷಣ ಶಾಖೆಯಲ್ಲಿ ಒಂದು ಕಿರಿಯ ಸಹಾಯಕರ ಹುದ್ದೆಯನ್ನು ಸೃಜಿಸಲು ಮಂಜೂರಾತಿಯನ್ನು ನೀಡಲಾಗಿದೆ.

ಈ ಹುದ್ದೆಯ ಬಾಬ್ತು ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2052–00–090–0–01 (ಸಚಿವಾಲಯ ಸಾಮಾನ್ಯ ಸೇವೆಗಳು) ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸಿಆಸುಇ (ಆಡಳಿತ ಸುಧಾರಣೆ–ಕಾರ್ಯಾಧ್ಯಯನ–2) ವಿಭಾಗ ಹಾಗೂ ಆರ್ಥಿಕ ಇಲಾಖೆಯು ಅನುಕ್ರಮವಾಗಿ ಟಿಪ್ಪಣಿ ಸಂಖ್ಯೆ: ಸಿಆಸುಇ 13 ಇಕಾಅ 07, ದಿನಾಂಕ 8–1–2007 ಹಾಗೂ ಆರ್ಥಿಕ ಇಲಾಖೆ 1658 ವೆಚ್ಚ/5–2008, ದಿನಾಂಕ 18–10–2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 5

**ವ್ಹಿ.ಎಸ್. ಜೇರೆ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಆಡಳಿತ–2)

**INFORMATION TECHNOLOGY, BIOTECHNOLOGY AND SCIENCE & TECHNOLOGY SECRETARIAT**

**Sub:** Approval of the Project proposal of M/s. BAGMANE DEVELOPERS PVT. LTD., 8th Floor, A Block, Lake view, Bagmane Tech Park, C.V. Ramannagar, Bangalore-560093 to establish "SEZ for IT/ITES" in Koorgalli Industrial Area, Mysore District.

**Read :** Proceedings of the 14th State High Level Clearance Committee (SHLCC) meeting held on 17-3-2008.

**Preamble:**

M/s. BAGMANE DEVELOPERS PVT. LTD., is a private Limited Company incorporated under Indian Companies Act, 1956 on 3rd January 1996, in Bngalore.

The main objects of the company is to carry on the business of designing, planning, managing, developing & /or construction of apartments, houses, shopping complex, commercial complex, hotels, health clubs, club houses, schools, colleges, community hall and other structures. They also do business as civil, mechanical, electrical, water suppliers of various services required for residential, commercial, industrial and other units.

The company is also in the business of tech park development and has developed 3.8 Million Sq. ft. of Tech Park at C.V. Raman Nagar, Bangalore and software companies viz. Motorola, Texas, i-flex, Samsung, Cognizant, Sasken, Novell and others have occupied the same and running their IT/ITES activities.

The Company is proposed to establish SEZ for IT/ITES in 25 acres of land in Koorgalli Industrial Area, Mysore District.

In the proposal submitted for the 14th State High Level Clearance Committee (SHLCC) meeting held on 17-3-2008, the Company has requested to approve the project to establish a "SEZ for IT/ITES, The project proposes to provide employment to about 36000 persons.

The State High Level Clearance Committee, after detailed discussion, approved the proposal by M/s. Bagmane Developers Pvt. Ltd and recommended to grant infrastructure facilities and extend incentives and concessions. Hence the following order.

**Government Order No. ITD 08 MDA 2008 (24), Bangalore Dated 27th May 2008**

In the circumstances explained in the preamble, Government are pleased to accord approval to establish "SEZ for IT/ITES", in 25 acres of KIADB land allotted for the project at Plot No. 13 in Mysore Industrial Area 3rd Phase, Koorgalli, Mysore District of KIADB for the project, with an investment of Rs. 306.85 crores and extended the following infrastructure facilities, incentives and concessions.

**Infrastructure Facilities:**

**Land:** The Company is permitted to establish the project in 25 acres of KIADB land allotted for the project at Plot No. 13, in Mysore Industrial Area 3rd Phase, Koorgalli, Mysore District of KIADB.

**Power:** 5 MW from CESCOM.

**Water:** Total requirement is 10.80 lakh lpd. As the water is not readily available with KIADB, till then, the company to manage with borewells, tankers etc.

**Incentives & Consessions:**

As per Millennium IT Policy and SEZ Policy of Government of India.

**Pollution Control Clearance:** The promoters to obtain CFE from KSPCB & Environmental Clearance from State. No civil works shall commence prior to obtaining EC as per prevailing law.

**Employment:** The company shall prepare a plan for development of human resource required for the project, train local people and provide employment to these trained local youth and comply with Government policy of employment to local people. A copy of human resource development plan shall be sent to the Directr of IT& Biotechnology for monitoring.

**Vendor Development:** Wherever there is a scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Director of IT & Biotechnology for monitoring.

**Social Infrastruture Development:** The company is advised to take up social infrastructure development projects in the vicinity of proposed location of the unit. A copy of such projects shall be sent to the Director of IT & Biotechnology for monitoring.

**Others:**

The Promoter shall submit milestones/progress in implementation of the project regularly, which will be monitored by the Department concerned

By order and in the name of the President of India

**S. Indumathi**

Deputy Secretary to Government

Information Technology, Biotechnology

and Science & Technology Department.

**Sub:** Approval of the Project proposal of M/s Nitesh Estates Pvt. Ltd., No. 8, 7th Floor, Nitesh Time Square, M.G.Road, Bangalore-560 001 to establish "IT/ITES SEZ", at Ganjimutt, EPIP Industrial Area, Mangalore

**Read :** Proeccedings of the 14th State High Level Clearance Committee (SHLCC) meeting held on 17-3-2008.

**Preamble:**

M/s. Nitesh Estates Pvt. Ltd, is a Private Limited Company, incorporated under Indian Companies Act, 1956 on 20th February 2004, in Bangalore.

The main objectives of the company, is to carry on the business of designing, planning, managing, developing estates, apartments, houses, factories, godowns, warehouses, hotels, holiday resorts, industrial sheds, shopping malls etc.

The company is currently in the business of IT, Commercial, Residential and Industrial Property Development, in Bangalore. The company has completed 2 residential projects with a built-up area of 90,000 Sq.ft and 2 commercial project of 1,98,000 Sq ft. in Bangalore. There are 15 residential/hotel/IT/other projects under implementation by the company, with a total built up area of 9.87 no Milli Sq.ft.

M/s. AMIF I Ltd., Mauritius, of M/s Och-Ziff Capital Management Group, a funds management company, is an equity holder of the company.

The income of the company for the year ended 31st March 2007 is Rs. 24.01 crores.

The networth of the company for the year ended 31st March 2007 is Rs. 108.93 croes and the combined networth of Mr. Nitesh Shetty & Mr. L.S. Vydyanathan, 2 of the directors of the company, is Rs.11.87 crores

The company is proposed to establish SEZ for IT/ITES in 25 acres of KIADB allotted land in EPIP Industrial Area of KIADB, Ganjimutt, Mangalore.

In the proposal submitted for the 14th State High Level Clearance Committee (SHLCC) meeting held on 17-3-2008, the company had requested to approve the project to establish a "SEZ for IT/ITES", The project proposes to provide employment to about 20520 persons.

The State High Level Clearance Committee, after detailed discussion, approved the proposal of M/s. NITESH ESTATES PVT LTD, and recommended to grant infrastructure facilities and extend incentives and concessions. Hence the following order:

**Government Order No. ITD 08 MDA 2008 (25), Bangalore Dated 27th May 2008**

In the circumstances explained in the Preamble, Government are pleased to accord approval to establish SEZ for IT/ITES in 25 acres of KIADB allotted land in EPIP Industrial Area of KIADB, Ganjimutt, Mangalore, for the project, with an investment of Rs. 433.77 crores and extended the following infrastructure facilities, incentives and concessions.

**Infrastructure Facilities:**

**Land:** The company is permitted to establish the project in 25 acres of KIADB land allotted for the project at Block No. 12 (Plot No. 103 to 114, 116 to 128, 142 to 155 and 160 to 169), of Ganjimutt, EPIP Industrial Area, Mangalore.

**Power:** 5,000 KVA from MESCOM.

**Water:** 7.5 lakh lpd from KIADB.

**Incentives & Concessions:** As per Millennim IT Policy and SEZ Policy of Government of India.

**Pollution Control Clearance:** The promoters to obtain CFE from KSPCB and Environmental Clearance from State. No civil works shall commence prior to obtaining EC as per prevailing law.

**Employment:** The company shall prepare a plan for development of human resource required for the project, train local people and provide employment to these trained local youth and comply with Government policy of employment to local people. A copy of human resource development plan shall be sent to the Director of IT & Biotechnology for monitoring.

**Vendor Development:** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of vendor development plan shall be sent to the Director of IT & Biotechnology for monitoring.

**Social Infrastructure Development:** The company is advised to take up social infrastructure development projects in the vicinity of proposed location of the unit. A copy of such projects shall be sent to the Director of IT and Biotechnology for monitoring.

**Others:** The Promoter shall submit milestones/progress in implementation of the project regularly, which will be monitoried by the Departments concerned.

By order and in the name of the Presidentof India

**(S. INDUMATHI )**

Deputy Secretary to Government,
Information Technology, Biotechnology
and Science & Technology Department.

**Sub:** Approval of the Project proposal of M/s S.S. Technologies, No. 1659, 5th 'A' Cross, 2nd Block, B.S.K. Ist Stage, Bangalore-560 050 to establish "IT/ITES Park" in Chikkanagamangala Grama, Sarjapura Hobli, Anekal Taluk, Bangalore Urban District

**Read :** Proceedings of the 14th State High Level Clearance Committee (SHLCC) meeting held on 17-3-2008

**Preamble:**

M/s. S.S. Technologies, is a partnership firm, registered on 4th September 2007.

The partners own 20 acres of land at Sy. Nos. 93, 98, 99, 35/1, 34/1, 34/2 of Chikkanagamangala Grama, Sarjapur Hobli, Anekal Taluk, Bangalore Urban District and proposed to establish an "IT/ITES Park". with an investment of Rs. 126.00 Crores in 20 acres of land.

It is proposed to be funded by a mix of promoters' contribution, venture funds foreign direct investment and term loans. The combined networth of Directors of the company is Rs. 59.54 crores.

The company is proposed to establish "IT/ITES Park" in 20 acres of land at Sy. Nos. 93, 98, 99, 35/1, 34/1 34/2, of Chikkanagamangala Grama, Sarjapur Hobli, Anekal Taluk, Bangalore Urban District.

In the proposal submitted for the 14th State High Level Clearance Committee (SHLCC) meeting held on 17-3-2008, the Company had requested to approve the project to establish a "IT/ITES Park. The project proposes to provide employment to about 5200 persons.

The State High Level Clearance Committee, after detailed discussion, approved the proposal of M/s. S.S. Technologies, and recommended to grant infrastructure facilities and extend incentives and concessions. Hence the following order:

**Government Order No. ITD 08 MDA 2008 (26), Bangalore Dated 27th May 2007**

In the circumstances explained in the Preamble, Government are pleased to accord approval to establish "IT/ITES Park" in 20 acres of land at Sy. Nos. 93, 98, 99, 35/1, 34/1 34/2 of Chikkanagamangala Grama, Sarjapur Hobli, Anekal Taluk, Bangalore Urban District for the project, with an investment of Rs. 126 crores and extended the following infrastructure facilities, incentives and concessions.

**Infrastructure Facilities:**

**Land:** The company is permitted to establish the project, in 20 acres of their own land Sy. Nos. 93, 98, 99, 35/1, 34/1 34/2 of Chikkanagamangala, Sarjapur Hobli, Anekal Taluk, Bangalore Urban District.

**Power:** 2 MW from BESCOM

**Water:** The promoters shall meet the water requirement out of rain water harvesting and water recycling, bore wells, until water is supplied by KIADB.

**Incentives and Concessions:** As per Millennium IT Policy

